# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1591**
**ಸದಸ್ಯರ ಹೆಸರು** : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 18.03.2021
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಹಗಲಿನ ವೇಳೆಯಲ್ಲಿಯೇ ನಿರಂತರ 7 ಗಂಟೆಗಳ ವಿದ್ಯುತ್ ನೀಡುವಂತೆ ಸರ್ಕಾರದಿಂದ ಈಗಾಗಲೇ ಆದೇಶವಾಗಿದ್ದು, ಈ ಯೋಜನೆಯು ಮಂಡ್ಯ ಜಿಲ್ಲೆಯಲ್ಲಿ ಭಾಗಶಃ ಮಾತ್ರ ಅನುಷ್ಠಾನಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಮಂಡ್ಯ ಜಿಲ್ಲೆಯಲ್ಲಿನ ರೈತರ ಕೃಷಿ ಪಂಪ್ ಸೆಟ್ ಗಳಿಗೆ ಹಗಲಿನ ವೇಳೆಯಲ್ಲಿಯೇ ನಿರಂತರ 7 ಗಂಟೆಗಳ ವಿದ್ಯುತ್ ಸರಬರಾಜು ಮಾಡಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವತಿಯಿಂದ ಹಲವು ಗ್ರಾಮಗಳಲ್ಲಿ ಹೊಸದಾಗಿ ವಿದ್ಯುತ್ ಉಪಕೇಂದ್ರಗಳನ್ನು ನಿರ್ಮಾಣ ಮಾಡಲು, ಈಗಾಗಲೇ ಚಾಲನೆಯಲ್ಲಿರುವ ವಿದ್ಯುತ್ ಉಪಕೇಂದ್ರಗಳಲ್ಲಿ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲು, ಮೇಲ್ದರ್ಜೆಗೇರಿಸುವುದು ಮತ್ತು ವಿದ್ಯುತ್ ಮಾರ್ಗಗಳ ಬಲವರ್ಧನೆಗೊಳಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಪರಿಪೂರ್ಣವಾಗಿ ಅನುಷ್ಠಾನಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: | |
| ಇ) | ಮಂಡ್ಯ ಹಾಗೂ ಮೈಸೂರು ಜಿಲ್ಲೆ ವ್ಯಾಪ್ತಿಯಲ್ಲಿ ಕೃಷಿ ಪಂಪ್‌ಸೆಟ್ ಗಳ ಪರಿವರ್ತಕಗಳು ಓವರ್ ಲೋಡ್ ಆಗಿ ಅಥವಾ ನಿರ್ವಹಣೆಯಿಲ್ಲದೆ ಪದೇ ಪದೇ ಸುಡುತ್ತಿದ್ದು, ಹೆಚ್ಚುವರಿ ಪರಿವರ್ತಕ ಅಳವಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: ಇವುಗಳನ್ನು ಬದಲಾಯಿಸಲು ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು: | ಮಂಡ್ಯ ಹಾಗೂ ಮೈಸೂರು ಜಿಲ್ಲೆಯು ಕೃಷಿ ಅವಲಂಬಿತ ಪ್ರದೇಶವಾಗಿರುವುದರಿಂದ ಬೇಸಿಗೆ ಕಾಲದಲ್ಲಿ ಎಲ್ಲಾ ರೈತರು ತಮ್ಮ ಪಂಪ್‌ಸೆಟ್‌ಗಳನ್ನು ಒಂದೇ ಸಮಯದಲ್ಲಿ ಚಾಲನೆಗೊಳಿಸುವುದರಿಂದ ಪರಿವರ್ತಕಗಳು ಓವರ್‌ಲೋಡ್ ಆಗುವ ಸಾಧ್ಯತೆ ಇರುತ್ತದೆ ಹಾಗೂ ವಿತರಣಾ ಪರಿವರ್ತಕಗಳು ವಿಫಲವಾಗುವ ಸಂಭವ ಹೆಚ್ಚಾಗಿರುತ್ತದೆ.<br>ಓವರ್ ಲೋಡ್ ಸಮಸ್ಯೆಯನ್ನು ನಿವಾರಿಸಲು ಹೆಚ್ಚುವರಿ ವಿತರಣಾ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ. 2019-20 ಹಾಗೂ 2020-21 (ಫೆಬ್ರುವರಿ-2021ರ ಅಂತ್ಯಕ್ಕೆ) ನೇ ಸಾಲಿನಲ್ಲಿ ಮಂಡ್ಯ ಹಾಗೂ ಮೈಸೂರು ಜಿಲ್ಲೆ ವ್ಯಾಪ್ತಿಯಲ್ಲಿ ಒಟ್ಟು 11810 ಸಂಖ್ಯೆಯ ಪರಿವರ್ತಕಗಳನ್ನು ವಿವಿಧ ಕಾಮಗಾರಿಗಳಡಿಯಲ್ಲಿ ಅಳವಡಿಸಿದ್ದು, ಅವುಗಳ ವಿವರಗಳು ಕೆಳಕಂಡಂತಿವೆ :-<br><br>ಜಿಲ್ಲೆ / ಅಳವಡಿಸಲಾದ ಪರಿವರ್ತಕಗಳ ಸಂಖ್ಯೆ: 2019-20 / 2020-21 (ಫೆಬ್ರುವರಿ-2021ರ ಅಂತ್ಯಕ್ಕೆ)<br>ಮೈಸೂರು: 3306 / 2451<br>ಮಂಡ್ಯ: 3343 / 2710<br><br>ನಿಗಮ ವ್ಯಾಪ್ತಿಯಲ್ಲಿ ಕಾಲಕಾಲಕ್ಕೆ ವಿದ್ಯುತ್ ವಿತರಣಾ ಮಾರ್ಗಗಳು ಹಾಗೂ ಪರಿವರ್ತಕ ಕೇಂದ್ರಗಳ ನಿರ್ವಹಣಾ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿರುತ್ತದೆ.<br>ರೈತರ ನೀರಾವರಿ ಪಂಪ್‌ಸೆಟ್‌ನ ವಿಫಲಗೊಂಡ ಪರಿವರ್ತಕಗಳನ್ನು ಕೆ.ಇ.ಆರ್.ಸಿ.ಯ ನಿಯಮಾನುಸಾರ ಲಭ್ಯತೆ ಹಾಗೂ ಜೇಷ್ಠತೆ ಆಧಾರದ ಮೇಲೆ ಬದಲಾಯಿಸಲಾಗುತ್ತಿದೆ. |

| ಜಿಲ್ಲೆ | ಅಳವಡಿಸಲಾದ ಪರಿವರ್ತಕಗಳ ಸಂಖ್ಯೆ | |
|---|---|---|
| | 2019-20 | 2020-21 (ಫೆಬ್ರುವರಿ-2021ರ ಅಂತ್ಯಕ್ಕೆ) |
| ಮೈಸೂರು | 3306 | 2451 |
| ಮಂಡ್ಯ | 3343 | 2710 |

| | | |
|---|---|---|
| | | 2018-19 ರಿಂದ ಹಾಗೂ 2020-21 (ಫೆಬ್ರುವರಿ-2021ರ ಅಂತ್ಯಕ್ಕೆ) ನೇ ಸಾಲಿನಲ್ಲಿ ಮಂಡ್ಯ ಹಾಗೂ ಮೈಸೂರು ಜಿಲ್ಲೆ ವ್ಯಾಪ್ತಿಯಲ್ಲಿ 18962 ಸಂಖ್ಯೆಯ ಪರಿವರ್ತಕಗಳು ವಿಫಲಗೊಂಡಿದ್ದು, ಈಗಾಗಲೇ 18902 ಸಂಖ್ಯೆಯ ಪರಿವರ್ತಕಗಳನ್ನು ಬದಲಾಯಿಸಲಾಗಿರುತ್ತದೆ. ಬಾಕಿ ಇರುವ 60 ಸಂಖ್ಯೆಯ ಪರಿವರ್ತಕಗಳನ್ನು ಬದಲಾಯಿಸಲು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತವು ಕ್ರಮ ಕೈಗೊಂಡಿದೆ. |
| ಈ) | ಮೈಸೂರು ಜಿಲ್ಲೆಯಲ್ಲಿ ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕೆ ಬಂದಿರುವ ಅರ್ಜಿಗಳ ಸಂಖ್ಯೆ ಎಷ್ಟು; ಸದರಿ ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಭೂತ ಸೌಲಭ್ಯ ಕಲ್ಪಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: | ಮೈಸೂರು ಜಿಲ್ಲೆಯಲ್ಲಿ ರೈತರ ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕಾಗಿ ಒಟ್ಟು 53,047 ಸಂಖ್ಯೆಯ ಅರ್ಜಿಗಳು ನೋಂದಣಿಯಾಗಿದ್ದು, ಅವುಗಳ ಪೈಕಿ 52,972 ಸಂಖ್ಯೆಯ ರೈತರು ನಿಗದಿತ ಶುಲ್ಕವನ್ನು ಪಾವತಿಸಿರುತ್ತಾರೆ. ಫೆಬ್ರುವರಿ 2021ರ ಅಂತ್ಯಕ್ಕೆ 50,205 ಸಕ್ರಮೀಕರಣಗೊಂಡ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಮೂಲಭೂತ ಸೌಕರ್ಯವನ್ನು ಕಲ್ಪಿಸಿ ಅವಶ್ಯಕತೆ ಇರುವೆಡೆಯಲ್ಲಿ ಪರಿವರ್ತಕಗಳನ್ನು ಅಳವಡಿಸಿ, ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಬಾಕಿ ಇರುವ 2767 ಸಂಖ್ಯೆಯ ಅರ್ಜಿಗಳಿಗೆ ವಿದ್ಯುತ್ ಮೂಲಭೂತ ಸೌಕರ್ಯವನ್ನು ಕಲ್ಪಿಸುವ ಕಾಮಗಾರಿಗಳಿಗೆ ಪೂರ್ಣ ಗುತ್ತಿಗೆ ಆಧಾರದಲ್ಲಿ ಅವಾರ್ಡ್ ನೀಡಲಾಗಿರುತ್ತದೆ. ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಯು ಈಗಾಗಲೇ ಫೆಬ್ರುವರಿ-2021ರ ಅಂತ್ಯಕ್ಕೆ ರೂ.147.62 ಕೋಟಿ ಹಣವನ್ನು ಖರ್ಚು ಮಾಡಿದೆ. |
| ಉ) | ಕೃಷಿ ಜಮೀನಿನಲ್ಲಿ ಮನೆ ಕಟ್ಟಿಕೊಂಡು ವಾಸ ಮಾಡುತ್ತಿರುವ ರೈತರ ಮನೆಗಳಿಗೆ ನಿರಂತರ ಜ್ಯೋತಿ ವಿದ್ಯುತ್ ನೀಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: | ನಿರಂತರ ಜ್ಯೋತಿ ಯೋಜನೆಯಡಿ ಗ್ರಾಮಾಂತರ ಪ್ರದೇಶಗಳಲ್ಲಿನ ಕೃಷಿ ಮತ್ತು ಕೃಷಿಯೇತರ ಸ್ಥಾವರಗಳನ್ನು ಬೇರ್ಪಡಿಸಿ ಕೃಷಿಯೇತರ ಸ್ಥಾವರಗಳಿಗೆ ನಿರಂತರ ವಿದ್ಯುತ್ ಸೌಲಭ್ಯ ಕಲ್ಪಿಸಲಾಗಿರುತ್ತದೆ.<br>ಈ ಯೋಜನೆಯಡಿ ಗ್ರಾಮ ಠಾಣಾ ವ್ಯಾಪ್ತಿಯಲ್ಲಿ ಬರುವ ಕೃಷಿಯೇತರ ಸ್ಥಾವರಗಳಿಗೆ ನಿರಂತರ ಜ್ಯೋತಿ ವಿದ್ಯುತ್ ಸೌಲಭ್ಯ ನೀಡಲಾಗುವುದು. |
| ಊ) | ರಾಜ್ಯದಲ್ಲಿ ಬೇಡಿಕೆಗಿಂತ ಹೆಚ್ಚುವರಿ ವಿದ್ಯುತ್ ಲಭ್ಯವಾಗುತ್ತಿದೆಯೇ; ಹಾಗಿದ್ದಲ್ಲಿ, ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಹೆಚ್ಚುವರಿಯಾಗಿ ವಿದ್ಯುತ್ ಸರಬರಾಜು ಮಾಡುವ ಯಾವುದಾದರೂ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ವಿವರಗಳನ್ನು ಒದಗಿಸುವುದು) | ಪ್ರಸ್ತುತ, ರಾಜ್ಯದಲ್ಲಿ ಬೇಡಿಕೆ ಇಲ್ಲದ ಸಮಯದಲ್ಲಿ ಹಾಗೂ ಬೇಡಿಕೆ ಇದ್ದಾಗ, ಬೇಡಿಕೆಗನುಗುಣವಾಗಿ ವಿದ್ಯುತ್ ಉತ್ಪಾದನೆಯಾಗುತ್ತಿರುವುದರಿಂದ ಯಾವುದೇ ಕೊರತೆ ಇರುವುದಿಲ್ಲ.<br>ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯಲ್ಲಿ ಸರ್ಕಾರದ ಆದೇಶದಂತೆ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ದಿನವಹಿ 7 ಗಂಟೆಗಳ ಕಾಲ 2 ಬ್ಯಾಚ್ ಗಳಲ್ಲಿ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br>ತಾಂತ್ರಿಕ ಸಾಧ್ಯತೆ ಇರುವ ಕೃಷಿ ಪಂಪ್‌ಸೆಟ್‌ಗಳಿಗೆ ಹಗಲಿನ ವೇಳೆಯಲ್ಲಿಯೇ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ.<br>ಹೆಚ್ಚುವರಿಯಾಗಿ ರೈತರ ಕೃಷಿ ಪಂಪ್ ಸೆಟ್ ಗಳಿಗೆ ವಿದ್ಯುತ್ ಸರಬರಾಜು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಸಂಖ್ಯೆ: ಎನರ್ಜಿ 84 ಇಬಿಎಸ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ